# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆಗುರುತಿನ ಪ್ರಶ್ನೆ ಸಂಖ್ಯೆ : **397**

ಸದಸ್ಯರ ಹೆಸರು : ಶ್ರೀ ಸುನೀಲ್ ಸುಬ್ರಮಣಿ ಎಂ.ಪಿ.
(ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರಿಸಬೇಕಾದ ಸಚಿವರು : ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು

ಉತ್ತರಿಸಬೇಕಾದ ದಿನಾಂಕ : 11-12-2020

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕರೋನದಿಂದಾಗಿ ಖಾಸಗಿ ಬಸ್ ಮಾಲೀಕರು ತಮ್ಮ ಬಸ್‌ಗಳನ್ನು ಸರ್ಕಾರಕ್ಕೆ ಒಪ್ಪಿಸಿರುವ ಪ್ರಕರಣಗಳೆಷ್ಟು; (ಜಿಲ್ಲಾವಾರು ವಿವರ ನೀಡುವುದು ಹಾಗೂ ಕೊಡಗು ಜಿಲ್ಲೆಯಲ್ಲಿನ ಬಸ್‌ಗಳ ವಿವರಗಳನ್ನು ನೀಡುವುದು) | ಖಾಸಗಿ ಬಸ್ ಮಾಲೀಕರು ತಮ್ಮ ಬಸ್‌ಗಳನ್ನು ದಿನಾಂಕ:01-03-2020 ರಿಂದ ಇಲ್ಲಿಯವರೆಗೆ ಆಧ್ಯರ್ಪಣೆಯಲ್ಲಿರುವ ಜಿಲ್ಲಾವಾರು ವಿವರಗಳನ್ನು<br>**ಅನುಬಂಧ-01** ರಲ್ಲಿ ಒದಗಿಸಲಾಗಿದೆ.<br>ಕೊಡಗು ಜಿಲ್ಲೆಯಲ್ಲಿ ದಿನಾಂಕ:01-03-2020 ರಿಂದ ಇಲ್ಲಿಯವರೆಗೆ ಒಟ್ಟು 174 ಬಸ್‌ಗಳು ಆಧ್ಯರ್ಪಣೆಯಲ್ಲಿರುತ್ತವೆ. |
| ಆ) | ಈ ಖಾಸಗಿ ಬಸ್ ಮಾಲೀಕರುಗಳಿಗೆ ಸರ್ಕಾರವು ನೀಡಿರುವ ಸಹಾಯ ಏನು; (ವಿವರಗಳನ್ನು ನೀಡುವುದು) | 1. ಸರ್ಕಾರದ ಅಧಿಸೂಚನೆ ಸಂಖ್ಯೆ: ಟಿಡಿ 09 ಟಿಡಿಆರ್ 2020, ದಿನಾಂಕ:19-05-2020 ರಲ್ಲಿ ಕರ್ನಾಟಕ ಮೋಟಾರು ವಾಹನ ತೆರಿಗೆ ಕಾಯ್ದೆ 1957ರ, ಕಲಂ 16(1) ರಂತೆ ರಾಜ್ಯದಲ್ಲಿ ನೋಂದಾಯಿಸಿರುವ ಎಲ್ಲಾ ಪ್ರಯಾಣಿಕ ಮತ್ತು ಸರಕು ಸಾರಿಗೆ ವಾಹನಗಳ ಮೋಟಾರು ವಾಹನ ತೆರಿಗೆಯನ್ನು ದಿನಾಂಕ:24-03-2020 ರಿಂದ 23-05-2020 ರವರೆಗೆ ಒಟ್ಟು 02 ತಿಂಗಳ ಅವಧಿಗೆ ತೆರಿಗೆ ಪಾವತಿಯಿಂದ ವಿನಾಯಿತಿ ನೀಡಿ ಆದೇಶಿಸಿದ್ದು, ಪ್ರತಿಯನ್ನು **ಅನುಬಂಧ-02** ರಲ್ಲಿ ಒದಗಿಸಲಾಗಿದೆ.<br>2. ಸರ್ಕಾರದ ಅಧಿಸೂಚನೆ ಸಂಖ್ಯೆ: ಟಿಡಿ 09 ಟಿಡಿಆರ್ (ಪಿ-1) 2020, ದಿನಾಂಕ: 06-07-2020 ರಲ್ಲಿ ಮೋಟಾರು ವಾಹನ ತೆರಿಗೆ ಕಾಯ್ದೆ 1957 ರ ಕಲಂ 4(1)ರ ನಿಯಮಗಳನ್ನು ಸಡಿಲಿಸಿ ಕರ್ನಾಟಕ ರಾಜ್ಯದ ಎಲ್ಲಾ ನೋಂದಾಯಿತ ವಾಹನಗಳಿಗೆ ಅನ್ವಯಿಸುವಂತೆ ದಿನಾಂಕ:15-04-2020 ಮತ್ತು 15-05-2020 ರೊಳಗಾಗಿ ಪಾವತಿಸಬೇಕಾಗಿದ್ದ ತೆರಿಗೆಯನ್ನು ದಿನಾಂಕ:15-07-2020 ರವರೆಗೆ ದಂಡ ರಹಿತವಾಗಿ ಪಾವತಿಸಲು ಅವಧಿಯನ್ನು ವಿಸ್ತರಿಸಿ ಆದೇಶ ಹೊರಡಿಸಲಾಗಿರುತ್ತದೆ. ಆದೇಶದ ಪ್ರತಿಯನ್ನು **ಅನುಬಂಧ-03** ರಲ್ಲಿ ಒದಗಿಸಲಾಗಿದೆ.<br>3. ಸರ್ಕಾರದ ಅಧಿಸೂಚನೆ ಸಂಖ್ಯೆ: ಟಿಡಿ 09 ಟಿಡಿಆರ್ (ಪಿ-1) 2020, ದಿನಾಂಕ:28-08-2020 ರಲ್ಲಿ ಮೋಟಾರು ವಾಹನ ತೆರಿಗೆ ಕಾಯ್ದೆ 1957ರ ಕಲಂ 4(1) ರ ನಿಯಮಗಳನ್ನು ಸಡಿಲಿಸಿ ಕರ್ನಾಟಕ ರಾಜ್ಯದ ಎಲ್ಲಾ ನೋಂದಾಯಿತ ವಾಹನಗಳಿಗೆ ಅನ್ವಯಿಸುವಂತೆ ದಿನಾಂಕ:15-08-2020 ಮತ್ತು 15-09-2020 ರೊಳಗಾಗಿ ಪಾವತಿಸಬೇಕಾಗಿದ್ದ ತೆರಿಗೆಯನ್ನು ದಿನಾಂಕ:30-09-2020 ರವರೆಗೆ ದಂಡರಹಿತವಾಗಿ ಪಾವತಿಸಲು ಅವಧಿ ವಿಸ್ತರಿಸಿ ಆದೇಶ ಹೊರಡಿಸಲಾಗಿರುತ್ತದೆ. ಆದೇಶದ ಪ್ರತಿಯನ್ನು **ಅನುಬಂಧ-04** ರಲ್ಲಿ ಒದಗಿಸಲಾಗಿದೆ. |

--2

| | | |
|---|---|---|
| ಇ) | ಈ ಖಾಸಗಿ ಬಸ್ / ಟ್ಯಾಕ್ಸಿಗಳಿಗೆ ಕರೋನಾ ಸಂಕಷ್ಟವು ನಿಲ್ಲುವವರೆಗೆ ರಸ್ತೆ ತೆರಿಗೆಯಲ್ಲಿ 50% ಕಡಿತಗೊಳಿಸುವ ಬಗ್ಗೆ ಸರ್ಕಾರದ ನಿಲುವೇನು? (ವಿವರ ನೀಡುವುದು) | ಕೋವಿಡ್–19ರ ಹಿನ್ನೆಲೆಯಲ್ಲಿ ವಿಧಿಸಲಾದ ನಿರ್ಬಂದಗಳನ್ನು ತೆರವುಗೊಳಿಸಿರುವುದರಿಂದ, ಪ್ರಸ್ತುತ, ಇಂತಹ ಯಾವುದೇ ಪ್ರಸ್ತಾವನೆಯು ಸರ್ಕಾರದ ಅಲೋಚನೆಯಲ್ಲಿರುವುದಿಲ್ಲ. |

ಟಿಡಿ 117 ಟಿಡಿಕ್ಯೂ 2020

(ಲಕ್ಷ್ಮಣ ಸಂಗಪ್ಪ ಸವದಿ)
ಉಪ ಮುಖ್ಯಮಂತ್ರಿಗಳು ಹಾಗೂ
ಸಾರಿಗೆ ಸಚಿವರು

ANNEXURE-1

| STATEMENT SHOWING VEHICLE SURRENDERED FOR THE PERIOD FROM 01-03-2020 TO TILL DATE | | | | | | |
|---|---|---|---|---|---|---|
| Sl. no | Name of the District | Vehicle Under Surrender | | | | TOTAL |
| | | Tourist Omini Bus | Contract Carriage | Stage Carriage | Private Service Vehicle | |
| 1 | BAGALKOTE | 0 | 1 | 0 | 0 | 1 |
| 2 | BALLARI | 0 | 10 | 48 | 47 | 105 |
| 3 | BELAGAVI | 8 | 0 | 0 | 6 | 14 |
| 4 | BENGALURU RURAL | 0 | 37 | 39 | 192 | 268 |
| 5 | BENGALURU URBAN | 341 | 2043 | 404 | 1473 | 4261 |
| 6 | BIDAR | 6 | 23 | 1 | 0 | 30 |
| 7 | CHAMARAJANAGARA | 0 | 42 | 167 | 0 | 209 |
| 8 | CHIKKABALLAPURA | 0 | 26 | 130 | 3 | 159 |
| 9 | CHIKKAMAGALURU | 0 | 9 | 91 | 0 | 100 |
| 10 | CHITRADURGA | 5 | 21 | 119 | 0 | 145 |
| 11 | DAKSHINA KANNADA | 9 | 39 | 255 | 16 | 319 |
| 12 | DAVANGERE | 0 | 17 | 47 | 10 | 74 |
| 13 | DHARWAD | 6 | 0 | 4 | 4 | 14 |
| 14 | GADAG | 0 | 0 | 1 | 6 | 7 |
| 15 | HASSAN | 0 | 16 | 0 | 1 | 17 |
| 16 | HAVERI | 0 | 1 | 1 | 0 | 2 |
| 17 | KALABURAGI | 2 | 3 | 0 | 0 | 5 |
| 18 | KODAGU | 0 | 35 | 139 | 0 | 174 |
| 19 | KOLAR | 0 | 17 | 171 | 3 | 191 |
| 20 | KOPPAL | 0 | 0 | 1 | 0 | 1 |
| 21 | MANDYA | 0 | 72 | 215 | 5 | 292 |
| 22 | MYSURU | 0 | 28 | 106 | 10 | 144 |
| 23 | RAICHUR | 7 | 0 | 0 | 0 | 7 |
| 24 | RAMANAGARA | 0 | 148 | 73 | 91 | 312 |
| 25 | SHIVAMOGGA | 0 | 16 | 301 | 8 | 325 |
| 26 | TUMAKURU | 0 | 72 | 452 | 5 | 529 |
| 27 | UDUPI | 0 | 55 | 215 | 7 | 277 |
| 28 | UTTARA KANNADA | 0 | 22 | 0 | 0 | 22 |
| 29 | VIJAYAPURA | 0 | 0 | 0 | 2 | 2 |
| 30 | YADGIR | 0 | 0 | 0 | 0 | 0 |
| | **Total** | **384** | 2753 | 2980 | **1889** | **8006** |

Annexure - 2



# ಕರ್ನಾಟಕ ಸರ್ಕಾರ

ಸಂ:ಟಿಡಿ 09 ಟಿಡಿಆರ್ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿಗಳ ಕಟ್ಟಡ,
ಬೆಂಗಳೂರು, ದಿನಾಂಕ:19-05-2020.

## ಅಧಿಸೂಚನೆ

ಕೋವಿಡ್-19ರ ಹಿನ್ನೆಲೆಯಲ್ಲಿ ಕರ್ನಾಟಕ ರಾಜ್ಯವನ್ನು ಸಂಪೂರ್ಣವಾಗಿ ಲಾಕ್‌ಡೌನ್ ಮಾಡಿರುವುದರಿಂದ, ಇದೊಂದು ವಿಶೇಷ ಪ್ರಕರಣವೆಂದು ಪರಿಗಣಿಸಿ, ಕರ್ನಾಟಕ ಮೋಟಾರು ವಾಹನ ತೆರಿಗೆ ಕಾಯ್ದೆ 1957 ರ ಕಲಂ 16(1)ರ ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ರಾಜ್ಯದಲ್ಲಿ ನೋಂದಾಯಿಸಿರುವ (ಹೊಸ ವಾಹನಗಳ ನೋಂದಣಿಯನ್ನು ಹೊರತುಪಡಿಸಿ) ಎಲ್ಲಾ ಪ್ರಯಾಣಿಕರು ಮತ್ತು ಸರಕು ಸಾರಿಗೆ ವಾಹನಗಳ ಮೋಟಾರು ವಾಹನಗಳ ತೆರಿಗೆಯನ್ನು ದಿನಾಂಕ:24-03-2020 ರಿಂದ 23-05-2020 ವರೆಗೆ ಒಟ್ಟು ಎರಡು ತಿಂಗಳ ಅವಧಿಗೆ ತೆರಿಗೆ ಪಾವತಿಯಿಂದ ವಿನಾಯಿತಿ ನೀಡಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,
19/5/2020
(ಎಂ. ಸತ್ಯವತಿ)
ಸರ್ಕಾರದ ಅಧೀನ ಕಾರ್ಯದರ್ಶಿ,
ಸಾರಿಗೆ ಇಲಾಖೆ.

**ಇವರಿಗೆ:**

ಸಂಕಲನಕಾರರು, ಕರ್ನಾಟಕ ರಾಜ್ಯಪತ್ರ ಇಲಾಖೆ, ವಿಕಾಸ ಸೌಧ ಘಟಕ, ಬೆಂಗಳೂರು:- ಈ ಅಧಿಸೂಚನೆಯನ್ನು ಇಂದೇ ಕರ್ನಾಟಕ ರಾಜ್ಯ ವಿಶೇಷ ರಾಜ್ಯಪತ್ರಿಕೆಯಲ್ಲಿ ಪ್ರಕಟಿಸುವಂತೆ ಕೋರಿದೆ.

1. ಪ್ರಧಾನ ಮಹಾಲೇಖಪಾಲರು (ಜಿ & ಎಸ್‌ಎಸ್‌ಎ)/(ಇ & ಆರ್‌ಎಸ್‌ಎ), ಕರ್ನಾಟಕ ಹೊಸ ಕಟ್ಟಡ, ಆಡಿಟ್ ಭವನ, ಅಂಚೆ ಪೆಟ್ಟಿಗೆ ಸಂಖ್ಯೆ:5398 ಹಾಗೂ ಪ್ರಧಾನ ಮಹಾಲೇಖಪಾಲರು (ಎ &ಇ), ಕರ್ನಾಟಕ ಪಾರ್ಕ್ ಹೌಸ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ:5359, ಬೆಂಗಳೂರು-560001.
2. ಆಯುಕ್ತರು, ಸಾರಿಗೆ ಮತ್ತು ರಸ್ತೆ ಸುರಕ್ಷತೆ, ಟಿ.ಟಿ.ಎಂ.ಸಿ. ಸಂಕೀರ್ಣ, 1ನೇ ಮಹಡಿ, 'ಎ' ಬ್ಲಾಕ್, ಶಾಂತಿನಗರ, ಬೆಂಗಳೂರು-27.
3. ಎಲ್ಲಾ ಅಪರ ಸಾರಿಗೆ ಆಯುಕ್ತರು/ ಜಂಟಿ ಸಾರಿಗೆ ಆಯುಕ್ತರು / ಉಪ ಸಾರಿಗೆ ಆಯುಕ್ತರು ಮತ್ತು ಹಿರಿಯ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು/ಪ್ರಾದೇಶಿಕ ಸಾರಿಗೆ ಅಧಿಕಾರಿಗಳು / ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು:- ಸಾರಿಗೆ ಆಯುಕ್ತರ ಮುಖಾಂತರ.
4. ಸರ್ಕಾರದ ಅಧೀನ ಕಾರ್ಯದರ್ಶಿ (ಜಿಲ್ಲಾ ಪಂಚಾಯತ್), ಆರ್ಥಿಕ ಇಲಾಖೆ (ವೆಚ್ಚ-11), ವಿಧಾನಸೌಧ, ಬೆಂಗಳೂರು.
5. ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರ ಆಪ್ತ ಕಾರ್ಯದರ್ಶಿ, ವಿಕಾಸ ಸೌಧ, ಬೆಂಗಳೂರು.
6. ಸರ್ಕಾರದ ಪ್ರಧಾನ ಕಾರ್ಯದರ್ಶಿಗಳ ಪತ್ರಾಂಕಿತ ಆಪ್ತ ಸಹಾಯಕರು, ಸಾರಿಗೆ ಇಲಾಖೆ, ಬೆಂಗಳೂರು.
7. ಶಾಖಾ ರಕ್ಷಾ ಕಡತ / ಹೆಚ್ಚುವರಿ ಪ್ರತಿಗಳು / ಒ.ಡಿ.ಜಿ.ಸಿ.,

Annexure - 3



ಕರ್ನಾಟಕ ಸರ್ಕಾರ

ಸಂ:ಸಾರಿಇ 9 ಟಿಡಿಆರ್ 2020 (ಪಿ-1)

ಕರ್ನಾಟಕ ಸರ್ಕಾರದ ಸಚಿವಾಲಯ
ಬಹುಮಹಡಿ ಕಟ್ಟಡ
ಬೆಂಗಳೂರು, ದಿನಾಂಕ: 06-07-2020

**ಅಧಿಸೂಚನೆ**

ಸರ್ಕಾರದ ಅಧಿಸೂಚನೆ ಸಂಖ್ಯೆ ಟಿಡಿ 9 ಟಿಡಿಆರ್ 2020 ದಿನಾಂಕ: 03-04-2020ರನ್ವಯ ಕರ್ನಾಟಕ ಮೋಟಾರು ವಾಹನ ತೆರಿಗೆ ಕಾಯ್ದೆ1957ರ ಕಲಂ 4(1)ರ ನಿಯಮಗಳನ್ನು ಸಡಿಲಗೊಳಿಸಿ, ಕರ್ನಾಟಕ ರಾಜ್ಯದ ಎಲ್ಲಾ ನೋಂದಾಯಿತ ವಾಹನಗಳಿಗೆ (ಹೊಸ ವಾಹನಗಳ ನೋಂದಣಿಯನ್ನು ಹೊರತುಪಡಿಸಿ) ಅನ್ವಯಿಸುವಂತೆ ದಿನಾಂಕ: 15-04-2020 ಮತ್ತು 15-05-2020ರ ಒಳಗಾಗಿ ಪಾವತಿಸಬೇಕಾಗಿದ್ದ ಮೋಟಾರು ವಾಹನ ತೆರಿಗೆಯನ್ನು ದಂಡ ರಹಿತವಾಗಿ ಪಾವತಿಸಲು ಈಗಾಗಲೇ ದಿನಾಂಕ: 01-06-2020ರವೆಗೆ ವಿಸ್ತರಿಸಿರುವ ಅವಧಿಯನ್ನು ಮತ್ತು ದಿನಾಂಕ: 15-06-2020ರ ಒಳಗಾಗಿ ಪಾವತಿಸಬೇಕಾಗಿದ್ದ ಮೋಟಾರು ವಾಹನ ತೆರಿಗೆಯನ್ನು ಕರ್ನಾಟಕ ರಾಜ್ಯದ ಎಲ್ಲಾ ನೋಂದಾಯಿತ ವಾಹನಗಳಿಗೆ (ಹೊಸ ವಾಹನಗಳ ನೋಂದಣಿಯನ್ನು ಹೊರತುಪಡಿಸಿ) ಅನ್ವಯಿಸುವಂತೆ ದಂಡ ರಹಿತವಾಗಿ ಪಾವತಿಸಲು ದಿನಾಂಕ: 15-07-2020ರ ವರೆಗೆ ಅವಧಿಯನ್ನು ವಿಸ್ತರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,

(ನಾಗರಾಜ)
ಸರ್ಕಾರದ ಉಪ ಕಾರ್ಯದರ್ಶಿ,
ಸಾರಿಗೆ ಇಲಾಖೆ.

**ಇವರಿಗೆ:**

1) ಸಂಕಲನಕಾರರು, ಕರ್ನಾಟಕ ರಾಜ್ಯ ಪತ್ರ, ಕೆಂಗೇರಿ, ಬಂಗಳೂರು.
2) ಮಹಾಲೇಖಪಾಲರು, ಕರ್ನಾಟಕ, ಬೆಂಗಳೂರು
3) ಆಯುಕ್ತರು. ಸಾರಿಗೆ ಮತ್ತು ರಸ್ತೆ ಸುರಕ್ಷತೆ, ಶಾಂತಿನಗರ, ಬೆಂಗಳೂರು.
4) ಸಾರಿಗೆ ಇಲಾಖೆಯ ಎಲ್ಲಾ ಅಪರ/ಜಂಟಿ/ಉಪ ಆಯುಕ್ತು ಮತ್ತು ಹಿ.ಪ್ರಾ.ಸಾ.ಅ/ಎಲ್ಲಾ ಪ್ರಾ.ಸಾ.ಅ/ಸ.ಪ್ರಾ.ಸಾ.ಅ ಗಳಿಗೆ (ಸಾರಿಗೆ ಆಯುಕ್ತ ಮುಖಾಂತರ).

**ಪ್ರತಿಗಳು:**

1) ಮಾನ್ಯ ಉಪ ಮುಖ್ಯಮಂತ್ರಿಗಳು. ಸಾರಿಗೆ ಇಲಾಖೆ ಇವರ ಆಪ್ತ ಕಾರ್ಯದರ್ಶಿಗಳು.
2) ಪ್ರಧಾನ ಕಾರ್ಯದರ್ಶಿಗಳು., ಸಾರಿಗೆ ಇಲಾಖೆ ರವರ ಆಪ್ತ ಕಾರ್ಯದರ್ಶಿಗಳು.
3) ಉಪಕಾರ್ಯದರ್ಶಿ ಸಾರಿಗೆ ಇಲಾಖೆ ರವರ ಆಪ್ತ ಸಹಾಯಕರು.
4) ಹೆಚ್ಚುವರಿ ಪ್ರತಿಗಹಳು/ಶಾಖಾ ರಕ್ಷಾ ಕಡತ.

Annexure-4



ಕರ್ನಾಟಕ ಸರ್ಕಾರ

ಸಂ:ಟಿಡಿ 9 ಟಿಡಿಆರ್ 2020 (ಪಿ-1)

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿಗಳ ಕಟ್ಟಡ,
ಬೆಂಗಳೂರು, ದಿನಾಂಕ:28-08-2020.

## ಅಧಿಸೂಚನೆ

ಕರ್ನಾಟಕ ಮೋಟಾರು ವಾಹನ ತೆರಿಗೆ ಕಾಯ್ದೆ 1957ರ ಕಲಂ 4(1)ರ ನಿಯಮಗಳನ್ನು ಸಡಿಲಗೊಳಿಸಿ, ಕರ್ನಾಟಕ ರಾಜ್ಯದ ಎಲ್ಲಾ ನೊಂದಾಯಿತ ವಾಹನಗಳಿಗೆ (ಹೊಸ ವಾಹನಗಳ ನೊಂದಣಿಯನ್ನು ಹೊರತು ಪಡಿಸಿ) ಅನ್ವಯಿಸುವಂತೆ ದಿನಾಂಕ:15-08-2020 ಮತ್ತು 15-09-2020ರ ಒಳಗಾಗಿ ಪಾವತಿಸಬೇಕಾಗಿದ್ದ ಮೋಟಾರು ವಾಹನ ತೆರಿಗೆಯನ್ನು ದಂಡ ರಹಿತವಾಗಿ ಪಾವತಿಸಲು ದಿನಾಂಕ:30-09-2020ರ ವರೆಗೆ ಅವಧಿಯನ್ನು ವಿಸ್ತರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,

(ಎಂ. ಸತ್ಯವತಿ) 28/8/2020
ಸರ್ಕಾರದ ಅಧೀನ ಕಾರ್ಯದರ್ಶಿ,
ಸಾರಿಗೆ ಇಲಾಖೆ.

**ಇವರಿಗೆ:**

1. ಸಂಕಲನಕಾರರು, ಕರ್ನಾಟಕ ರಾಜ್ಯ ಪತ್ರ, ಕೆಂಗೇರಿ, ಬೆಂಗಳೂರು.
2. ಮಹಾಲೇಖಪಾಲರು, ಕರ್ನಾಟಕ, ಬೆಂಗಳೂರು.
3. ಆಯುಕ್ತರು, ಸಾರಿಗೆ ಮತ್ತು ರಸ್ತೆ ಸುರಕ್ಷತೆ, ಶಾಂತಿನಗರ, ಬೆಂಗಳೂರು.
4. ಸಾರಿಗೆ ಇಲಾಖೆಯ ಎಲ್ಲಾ ಅಪರ/ಜಂಟಿ/ಉಪ ಆಯುಕ್ತರು ಮತ್ತು ಹಿ.ಪ್ರಾ.ಸಾ.ಅ/ಎಲ್ಲಾ ಪ್ರಾ.ಸಾ.ಅ/ಸ.ಪ್ರಾ.ಸಾ.ಅ ಗಳಿಗೆ (ಸಾರಿಗೆ ಆಯುಕ್ತರ ಮುಖಾಂತರ).

**ಪ್ರತಿಗಳು:**

1. ಮಾನ್ಯ ಉಪ ಮುಖ್ಯಮಂತ್ರಿಗಳು, ಸಾರಿಗೆ ಇಲಾಖೆ ಇವರ ಆಪ್ತ ಕಾರ್ಯದರ್ಶಿಗಳು.
2. ಪ್ರಧಾನ ಕಾರ್ಯದರ್ಶಿಗಳು, ಸಾರಿಗೆ ಇಲಾಖೆ ರವರ ಆಪ್ತ ಕಾರ್ಯದರ್ಶಿಗಳು.
3. ಉಪಕಾರ್ಯದರ್ಶಿ ಸಾರಿಗೆ ಇಲಾಖೆ ರವರ ಆಪ್ತ ಸಹಾಯಕರು.
4. ಹೆಚ್ಚುವರಿ ಪ್ರತಿಗಳು/ ಶಾಖಾ ರಕ್ಷಾ ಕಡತ.